


# ಹೊಂಗನಸು

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ




ಸಂಪುಟ: ೦೩ ಸಂಚಿಕೆ: ೪ Vol. 03 Issue 4 | ಜುಲೈ ೨೦೧೬ July 2016 | ಪುಟಗಳು ೮ Pages - 8 | ವಾರ್ಷಿಕ ಚಂದ ರೂ. ೨೦/- A. Sub. - Rs. 20/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ Editor : Sri. B.R. Ravindranath


## ಕೃತಿ-ಚಿತ್ರ ಮಾಲಿಕೆ: ಕಲಾತ್ಮಕ ಚಿತ್ರಗಳಿಗೂ ಪ್ರೇಕ್ಷಕರಿದ್ದಾರೆ

ಬಿ.ಎಂ.ಶ್ರೀ ಪ್ರತಿಷ್ಠಾನದ ವಿನೂತನ ಕಾರ್ಯಕ್ರಮ ಕೃತಿ-ಚಿತ್ರ ಮಾಲಿಕೆ ದಿನಾಂಕ 5ನೇ ಜೂನ್ 2016 ರಂದು ಪ್ರಾರಂಭವಾಯಿತು. ಕಾದಂಬರಿ ಹಾಗೂ ಕಥೆಗಳನ್ನು ಆಧರಿಸಿ ನಿರ್ಮಾಣ ಮಾಡಲಾದ ಚಲನ ಚಿತ್ರಗಳನ್ನು ಪ್ರತಿತಿಂಗಳೂ ಪ್ರದರ್ಶಿಸುವ ಕಾರ್ಯಕ್ರಮ ಇದಾಗಿರುತ್ತದೆ. ಶಬ್ದ ಮಾಧ್ಯಮದಿಂದ ದೃಶ್ಯ ಮಾಧ್ಯಮಕ್ಕೆ ಪರಿವರ್ತಿಸಿದ ಚಲನ ಚಿತ್ರಗಳಿಂದ ಸಾಹಿತಿಗಳು ಹಾಗೂ ಚಲನ ಚಿತ್ರ ಕಲಾವಿದರು ಬಹಳಷ್ಟು ಕಲಿಯಬಹುದಾಗಿದ್ದು ಎರಡೂ ಮಾಧ್ಯಮದವರಿಗೆ ಹೆಚ್ಚಿನ ಅರಿವನ್ನು ಉಂಟುಮಾಡಲು ಈ ಪ್ರಯತ್ನ ಸಹಾಯಕವಾಗುತ್ತದೆ. ಜೊತೆಗೆ ಸಿನಿಮಾ ಹಾಗೂ ಸಾಹಿತ್ಯ ಕ್ಷೇತ್ರಗಳ ನಡುವೆ ಹೆಚ್ಚಿನ ಮಟ್ಟದ ಪರಸ್ಪರ ಕೊಡುಕೊಳ್ಳುವಿಕೆಯ ಸಂಬಂಧವನ್ನು ಸಾಧಿಸಬಹುದಾಗಿರುತ್ತದೆ.

ಬಿ.ಎಂ.ಶ್ರೀ ಪ್ರತಿಷ್ಠಾನದ ಬಿ.ಎಂ.ಶ್ರೀ ಕಲಾಭವನದಲ್ಲಿ ಹಮ್ಮಿ ಕೊಂಡಿದ್ದ ಸಾಹಿತ್ಯಾಧಾರಿತ ಚಲನಚಿತ್ರಗಳ ಪ್ರದರ್ಶನ ಹಾಗೂ ಚರ್ಚೆಯ ಮೊದಲನೇ ಕಂತು ಕೃತಿ ಚಿತ್ರ 1 ಉದ್ಘಾಟಿಸಿ ಮಾತನಾಡಿದ ನಿರ್ದೇಶಕ ಗಿರೀಶ್ ಕಾಸರವಳ್ಳಿ ಅವರು ಕಲಾತ್ಮಕ ಚಿತ್ರಗಳಿಗೆ ಕೂಡ ಪ್ರೇಕ್ಷಕರಿದ್ದಾರೆ ಎಂಬ ವಾದಕ್ಕೆ ಇತ್ತೀಚೆಗೆ ನಗರದಲ್ಲಿ ಹೆಚ್ಚುತ್ತಿರುವ ಪ್ರೇಕ್ಷಕರೇ ಸಾಕ್ಷಿ ಎಂದು ಹೇಳಿದರು.ವಾಣಿಜ್ಯ ಸಿನಿಮಾಗಳಿಗೆ ಮಾತ್ರವಲ್ಲ, ಕಲಾತ್ಮಕ ಚಿತ್ರಗಳಿಗೂ ಪ್ರೇಕ್ಷಕರಿದ್ದಾರೆ.ಆದರೆ, ಕಲಾತ್ಮಕ ಚಿತ್ರಗಳನ್ನು ನೋಡುವ ಅವಕಾಶವೇ ಸಿಗುತ್ತಿಲ್ಲ. ಚಿತ್ರಗಳ ವೀಕ್ಷಣೆಗೆ ಅವಕಾಶ ಕಲ್ಪಿಸಿದರೆ, ಪ್ರೇಕ್ಷಕರು ಬಂದೇ ಬರುತ್ತಾರೆ ಎಂಬುದು ಬಹುತೇಕ ನಿರ್ದೇಶಕರು ಮೊದಲಿನಿಂದಲೂ ಮಂಡಿಸುತ್ತಿರುವ ವಾದ.ಇದಕ್ಕೆ ಇತ್ತೀಚೆಗೆ ನಗರದಲ್ಲಿ ಕಲಾತ್ಮಕ ಚಿತ್ರಗಳ ಪ್ರದರ್ಶನಕ್ಕೆ ನಡೆಯುತ್ತಿರುವ ವಿಭಿನ್ನ ಪ್ರಯತ್ನಗಳಿಗೆ ಜನರು ಆಸಕ್ತಿಯಿಂದ ಸ್ಪಂದಿಸುತ್ತಿರುವುದೇ ಸಾಕ್ಷಿ ಎಂದರು.

ಚಿತ್ರವೊಂದರ ಪ್ರಚಾರಕ್ಕೆ ಒಂದು ಕೋಟಿ ರೂ.ಗಳಷ್ಟು ವೆಚ್ಚವಾಗುತ್ತದೆ ಎಂದು ಅಂದಾಜಿಸಲಾಗುತ್ತಿದೆ.ಕಲಾತ್ಮಕ ಚಿತ್ರಗಳ ನಿರ್ಮಾಪಕರು ಚಿತ್ರದ ಪ್ರಚಾರಕ್ಕಾಗಿ ಆ ಮಟ್ಟದ ಹಣ ವ್ಯಯಿಸಲು ಶಕ್ತರಾಗಿರುವುದಿಲ್ಲ. ಇದರಿಂದ ಚಿತ್ರಗಳು ಜನರನ್ನು ಪರಿಣಾಮಕಾರಿಯಾಗಿ ತಲುಪುವಲ್ಲಿ ವಿಫಲವಾಗುತ್ತಿವೆ ಎಂದು ಬೇಸರ ವ್ಯಕ್ತಪಡಿಸಿದರು.

ಕೃತಿ ಚಿತ್ರ ಪ್ರಯತ್ನದ ಮೊದಲ ಚಿತ್ರವಾಗಿಖ್ಯಾತ ನಿರ್ದೇಶಕ ಶ್ರೀ ಪಿ.ಶೇಷಾದ್ರಿಯವರು ನಿರ್ದೇಶಿಸಿರುವ ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ರಚಿಸಿದ ಕಾದಂಬರಿ ಆಧಾರಿತ 'ಸುಬ್ಬಣ್ಣ' ಚಲನಚಿತ್ರವನ್ನು ಪ್ರದರ್ಶಿಸಲಾಯಿತು. (ದಿನಾಂಕ 6ನೇ ಜೂನ್ ರಂದು ಮಾಸ್ತಿಯವರು ಜನಿಸಿದ ದಿನ ಹಾಗೂ ನಿಧನ ಹೊಂದಿದ ದಿನವೂ ಆಗಿರುತ್ತದೆ) ನಂತರ ನಡೆದ ಸಂವಾದದಲ್ಲಿ ಈ ಚಲನಚಿತ್ರದ ನಿರ್ದೇಶಕರಾದ ಶ್ರೀ ಪಿ.ಶೇಷಾದ್ರಿ ಚಲನಚಿತ್ರ ವಿಮರ್ಶಕ ಶ್ರೀ ವಿದ್ಯಾಶಂಕರ್, ಪತ್ರಕರ್ತ ಶ್ರೀ ಎನ್. ಎಸ್. ಶ್ರೀಧರಮೂರ್ತಿ, ನಾಡೋಜ ಪ್ರೊ.ಎಂ ಹೆಚ್ ಕೃಷ್ಣಯ್ಯ, ಡಾ. ವಿಜಯಾ ಸುಬ್ಬುರಾಜ್, ಅವರುಗಳು ಭಾಗವಹಿಸಿದರು. ಮೊದಲಿಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಡಾ. ಪಿ.ವಿ. ನಾರಾಯಣ ಅವರು ಸ್ವಾಗತ ಕೋರಿದರು.ಪತ್ರಕರ್ತ ಶ್ರೀ ಎನ್.ಎಸ್. ಶ್ರೀಧರಮೂರ್ತಿ ಪ್ರಾಸ್ತಾವಿಕ ನುಡಿಗಳನ್ನು ಆಡಿ ಈ ಮಾಲಿಕೆಯ ಆಶಯವನ್ನು ವಿವರಿಸಿದರು.ಗೌರವ ಕಾರ್ಯದರ್ಶಿ ಪ್ರೊ.ಅಬ್ದುಲ್ ಬಶೀರ್ ವಂದನಾರ್ಪಣೆ ಮಾಡಿದರು.ಪ್ರತಿ ತಿಂಗಳ ಎರಡನೇ ಭಾನುವಾರ ಚಿತ್ರ ಪ್ರದರ್ಶಿಸಲಾಗುತ್ತದೆ.





**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/-

ಐದು ವರ್ಷಗಳ ಚಂದಾ
ರೂ. ೧೦೦/-


ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ:
೨೬೬೧೫೪೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org

## ಸಂಪಾದಕೀಯ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಜೂನ್ ತಿಂಗಳಿನಲ್ಲಿ ಹಲವಾರು ಕಾರ್ಯಕ್ರಮಗಳು ನಡೆದಿರುತ್ತವೆ. ಬಹುದಿನಗಳಿಂದ ಚಿಂತನೆಯಲ್ಲಿದ್ದ ಕೃತಿ–ಚಿತ್ರ ಮಾಲಿಕೆಯನ್ನು ಪ್ರಾರಂಭಿಸಲಾಗಿದೆ. ಹಾಗೆಯೇ ಹಳೇ ವಿದ್ಯಾರ್ಥಿಗಳ ಸಂಘ ಸ್ಥಾಪನೆಗೆ ಚಾಲನೆ ನೀಡಲಾಗಿದೆ. ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ವಿಶೇಷ ಮಾಧ್ಯಮ ಪಟ್ಟಿಗೆ ಹೊಂಗನಸು ಪತ್ರಿಕೆಯನ್ನು ಸೇರಿಸಲು ಅರ್ಹತೆ ಇದ್ದು, ಅರ್ಜಿಯನ್ನು ಸಲ್ಲಿಸಲಾಗಿದೆ.ಇನ್ನು ಮುಂದೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪ್ರಕಟಿಸುವ ಷಾಣ್ಮಾಸಿಕ ವಿದ್ವತ್ ಪತ್ರಿಕೆ ಲೋಚನಾ ಪತ್ರಿಕೆಗೆ ವಾರ್ಷಿಕ ಹಾಗೂ ಆಜೀವ ಚಂದಾ ದರಗಳನ್ನು ನಿಗದಿಸಲಾಗಿದೆ. ಆಸಕ್ತರು ಚಂದಾಹಣವನ್ನು ರವಾನಿಸಲು ಈ ಮೂಲಕ ಕೋರುತ್ತೇವೆ.

ಭವಿಷ್ಯದಲ್ಲಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಬಹಳಷ್ಟು ನೂತನ ಕಾರ್ಯಕ್ರಮಗಳು ಹಾಗೂ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ಯೋಜಿಸಲಾಗುತ್ತಿದೆ.ಅವುಗಳನ್ನು ಸಾಧಿಸಲು ನಿಮ್ಮ ಭಾಗವಹಿಕೆ ಹಾಗೂ ಬೆಂಬಲ ಅತ್ಯಗತ್ಯ. ದಯವಿಟ್ಟು ಎಲ್ಲಾ ಚಟುವಟಿಕೆಗಳಲ್ಲಿ ನೀವೆಲ್ಲರೂ ಸಕ್ರಿಯರಾಗಿ ಭಾಗವಹಿಸಬೇಕೆಂದು ಕೋರುತ್ತೇವೆ.

**ಬಿಆರ್ ರವೀಂದ್ರನಾಥ್**
ಸಂಪಾದಕರು

### ಜುಲೈ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಬಿಎಲ್ ರೈಸ್ | 17–7–1837 |
| ಶಾಂತಿನಾಥ ದೇಸಾಯಿ | 22–7–1929 |
| ರಂ ಶ್ರೀ ಮುಗಳಿ | 15–7–1906 |
| ಜಿ.ಬಿ. ಜೋಶಿ | 29–7–1904 |
| ಮಧುರ ಚೆನ್ನ | 31–7–1903 |
| ಟಿಪಿ ಕೈಲಾಸಂ | 9–7–1884 |
| ಆಲೂರ ವೆಂಕಟರಾಯರು | 12–7–1880 |
| ಫಗುಹಳಕಟ್ಟಿ | 2–7–1880 |

### ಜುಲೈ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಬಿಎಲ್ ರೈಸ್ | 10–7–1837 |
| ಫಿಕ್ರಿನ್ | ಜುಲೈ 1936 |
| ಆನಕೃ | 8–7–1971 |
| ಜಯದೇವಿ ತಾಯಿ ಲಿಗಾಡೆ | 25–7–1986 |
| ತ್ರಿವೇಣಿ | 29–7–1963 |
| ನಿರುಪಮಾ | 11–07–2013 |

### ಕಾರ್ಯಕಾರಿ ಸಮಿತಿ ಸಭೆ

**ದಿನಾಂಕ 6ನೆ ಜೂನ್ 2016 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ತ್ರೈಮಾಸಿಕ ಕಾರ್ಯಕಾರಿ ಸಮಿತಿ ಸಭೆಯನ್ನು ನಡೆಸಲಾಯಿತು. ಈ ಸಭೆಯಲ್ಲಿ ಕೈಗೊಂಡ ಪ್ರಮುಖ ನಿರ್ಧಾರಗಳು ಹೀಗಿವೆ:**

1. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಉಪನಿಯಮಗಳಿಗೆ ಕೆಲವು ತಿದ್ದುಪಡಿಗಳನ್ನು ತರಲು ಸರ್ವಸದಸ್ಯರ ವಿಶೇಷ ಸಭೆಯನ್ನು ದಿನಾಂಕ 3ನೇ ಜುಲೈ 2016ರಂದು ಬೆಳಿಗ್ಗೆ 10.00 ಗಂಟೆಗೆ ನಡೆಸುವುದು
2. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ 36 ವಾರ್ಷಿಕ ಸರ್ವಸದಸ್ಯರ ಸಭೆಯನ್ನು ದಿನಾಂಕ 3ನೇ ಜುಲೈ 2016ರಂದು ಬೆಳಿಗ್ಗೆ 11.00 ಗಂಟೆಗೆ ನಡೆಸುವುದು
3. ಇನ್ನು ಮುಂದೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪ್ರಕಟಿಸುವ ಷಾಣ್ಮಾಸಿಕ ವಿದ್ವತ್ ಪತ್ರಿಕೆ ಕರ್ನಾಟಕ ಲೋಚನಾ ಪತ್ರಿಕೆಗೆ ವಾರ್ಷಿಕ ಚಂದಾ ರೂ. 100/– ಹಾಗೂ ಆಜೀವ ಚಂದಾ ರೂ. 1500 ಎಂದು ನಿಗದಿಸಲಾಗಿದೆ

### ಪ್ರಕಟಣೆ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಉಪನಿಯಮಗಳಿಗೆ ಕೆಲವು ತಿದ್ದುಪಡಿಗಳನ್ನು ತರಲು ಸರ್ವಸದಸ್ಯರ ವಿಶೇಷ ಸಭೆಯನ್ನು ದಿನಾಂಕ 3ನೇ ಜುಲೈ 2016ರಂದು ಬೆಳಿಗ್ಗೆ 10.00 ಗಂಟೆಗೆ ಕರೆಯಲಾಗಿರುತ್ತದೆ ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ 36 ವಾರ್ಷಿಕ ಸರ್ವಸದಸ್ಯರ ಸಭೆಯನ್ನು ದಿನಾಂಕ 3ನೇ ಜುಲೈ 2016ರಂದು ಬೆಳಿಗ್ಗೆ 11.00 ಗಂಟೆಗೆ ಕರೆಯಲಾಗಿರುತ್ತದೆ.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಲ್ಲಾ ಆಜೀವ ಸದಸ್ಯರಿಗೆ ಸಭೆಯ ತಿಳಿವಳಿಕೆ ಪತ್ರಗಳನ್ನು ಈಗಾಗಲೇ ಅಂಚೆ ಮೂಲಕ ಕಳುಹಿಸಲಾಗಿರುತ್ತದೆ.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಲ್ಲಾ ಸದಸ್ಯರು ಸಕಾಲಕ್ಕೆ ಆಗಮಿಸಿ ಸಭೆಗಳ ಕಾರ್ಯಕಲಾಪಗಳನ್ನು ನಡೆಸಿಕೊಡಬೇಕೆಂದು ಈ ಮೂಲಕ ಕೋರಿಕೊಳ್ಳುತ್ತೇವೆ.

### ಕರ್ನಾಟಕ ಲೋಚನಾ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪ್ರಕಟಿಸುವ ಷಾಣ್ಮಾಸಿಕ ವಿದ್ವತ್ ಪತ್ರಿಕೆ ಕರ್ನಾಟಕ ಲೋಚನಾ ಪತ್ರಿಕೆಗೆ ಸಾಹಿತ್ಯ–ಸಂಸ್ಕೃತಿಗೆ ಸಂಬಂಧಿಸಿದ ವಿಮರ್ಶಾತ್ಮಕ/ಸಂಶೋಧನಾತ್ಮಕ ಲೇಖನಗಳನ್ನು ವಿದ್ವಾಂಸರಿಂದ ಆಹ್ವಾನಿಸಿದೆ.ಲೇಖಕರು ತಮ್ಮ ಲೇಖನಗಳನ್ನು ಹಸ್ತಪ್ರತಿ ಅಥವಾ ಬೆರಳಚ್ಚು ರೂಪದಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು ಅಥವಾ bmsrilochana@gmail.comಗೆ ಈ ಮೈಲ್ ಮೂಲಕ ರವಾನಿಸಬಹುದು.

## ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

ಮತ್ತೆ ಮತ್ತೊಂದು ಚುನಾವಣೆ ಬರದಂತೆ ಮಾಡಯ್ಯಾ!
ಪಕ್ಷಾಂತರ ಪಿಡುಗಿನ ಗಾಳಿ ಬೀಸದಂತೆ ಮಾಡಯ್ಯಾ!
ಕೋಳೆಗೇರಿ ನಿರ್ಮಾಣಕ್ಕೆ ಕಡಿವಾಣ ಹಾಕಯ್ಯಾ!
ರಸ್ತೆ, ನೀರು, ವಿದ್ಯುತ್ ನಂತಹ ನಾಗರಿಕ ಸೌಲಭ್ಯಗಳ ಕರುಣಿಸಯ್ಯಾ!
ಸರ್ಕಾರ ಕಾರ್ಪೋರೇಷನ್‌ಗಳಲ್ಲಿ ವಿದ್ಯುತ್ ಸಂಚಾರವಗುವಂತೆ
ಮಾಡಿ ನಮ್ಮ ಸಲಹಯ್ಯಾ!
ನಗರ ಸಾರಿಗೆಯ ಉದ್ಧಾರ ಮಾಡಿ ಲಾಭಪ್ರದವಾಗುವಂತೆ
ಕಾಪಾಡು 'ಅಲ್ಲಾರಖಾ', ನಿನ್ನ ಸೆರಗೂಡ್ಡಿ ಬೇಡುವೆ! ॥8॥

ಹೆಣ್ಣು ಪಾಪಿ ಎಂಬುರು, ಹೆಣ್ಣು ಪಾಪಿಯಲ್ಲ!
ಗಂಡು ಪುಣ್ಯವಂತನೆಂಬರು ಅದು ಹೇಗಯ್ಯಾ?
ಬಡತನ– ಅಜ್ಞಾನ ಪೂರ್ವಜನ್ಮದ ಕರ್ಮವೆಂಬುರು
ಅದು ಸುಳ್ಳವೇನಯ್ಯಾ!
ಜಾತಿಕುಲಭೇದವದೆತ್ತಣದಯ್ಯಾ?
ಹೊಗಳಿಕೆ ಎಂಬುದು ಕೊಲೆಯಯ್ಯಾ!
ತೆಗಳಿಕೆ ಎಂಬುದು ಕುಲಮದವಯ್ಯಾ!
ಸುಖ– ಸಂತೋಷ– ಸಂಪತ್ತು ಅದೃಷ್ಟವೆಂಬವರ
ನಾನೊಲ್ಲೆನೆಂಬನು ಲೋಕಪ್ರಿಯ 'ಅಲ್ಲಾರಖಾ' ॥9॥

# ಜುಲೈ 2016 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



**04–07–2016 ಬುಧವಾರ ಸಂಜೆ 6 ಗಂಟೆಗೆ**

ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ಸಾಕ್ಷ್ಯ ಚಿತ್ರಗಳ ಪ್ರದರ್ಶನ

**07–07–2016 ಗುರುವಾರ ಸಂಜೆ 6 ಗಂಟೆಗೆ**

ಗಮಕವಾಹಿನಿ–6

"ಶ್ರೀಕೃಷ್ಣ ಜನನ"

ಮೈ.ಶೇ. ಅನಂತಪದ್ಮನಾಭ ರಾಯರ ಕೃತಿ

ಭಾಗವಹಿಕೆ : ಚೈತನ್ಯ, ನಿರೀಕ್ಷ್ಯ, ಭಾವನ, ಅಧಿತಿ, ಮೇಘನಾ, ಅಖಿಲ





**10–07–2016 ಭಾನುವಾರ ಬೆಳಿಗ್ಗೆ 10.30 ಗಂಟೆಗೆ**

ಕೃತಿ–ಚಿತ್ರ –2

ಚಲನ ಚಿತ್ರ ಪ್ರದರ್ಶನ

ಶ್ರೀ ಟಿ ಎಸ್ ರಂಗಾ ನಿರ್ದೇಶಿಸಿರುವ ಶ್ರೀ ರಂ. ಶ ಅವರ ಕಾದಂಬರಿ ಆಧಾರಿತ

"ಸಾವಿತ್ರಿ"ಚಲನ ಚಿತ್ರ ಪ್ರದರ್ಶನ

ಚಿತ್ರದ ಬಗ್ಗೆ : ಶ್ರೀ ಹೆಚ್.ಜಿ. ಸೋಮಶೇಖರ ರಾವ್

ಮುಖ್ಯ ಅತಿಥಿ: ಶ್ರೀ ಟಿ ಎಸ್ ರಂಗಾ, ಪ್ರಸಿದ್ಧ ನಿರ್ದೇಶಕರು

**13–07–2016 ಸೋಮವಾರ ಸಂಜೆ 6 ಗಂಟೆಗೆ**

'ಅಕ್ಕರಗೊಟ್ಟಿ'

ವಿಷಯ: ಕನ್ನಡ ಪಠ್ಯ ಬೋಧನೆ ಕೆಲವು ಪ್ರಶ್ನೆಗಳು

ಚಾಲನೆ : ಪ್ರೊ॥ ಹೆಚ್.ಎನ್. ಮುರಳೀಧರ





**18–07–2016 ಸೋಮವಾರ ಸಂಜೆ 6 ಗಂಟೆಗೆ**

ರಾಸ ಸಾಹಿತ್ಯ, ತೀನಂಶ್ರೀ, ಟಿ ಎಸ್ ವೆಂಕಣ್ಣಯ್ಯ,

ಡಿ. ಲಿಂಗಯ್ಯ, ಶಾರದಾ ಹನುಮಯ್ಯ ದತ್ತಿ ಉಪನ್ಯಾಸ

ವಿಷಯ: ಆಧುನಿಕ ಕನ್ನಡ ತೆಲುಗು ಸಾಹಿತ್ಯ – ಪರಸ್ಪರ ಅನುವಾದಗಳು

ಉಪನ್ಯಾಸಕಾರರು: ಡಾ. ಮಾರ್ಕಾಂಡಪುರಂ ಶ್ರೀನಿವಾಸ



**22–07–2016 ಶುಕ್ರವಾರ ಸಂಜೆ 6 ಗಂಟೆಗೆ**

ವಚನ ವಿಹಾರ

ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ

ಸಮಾರೋಪ ಕಾರ್ಯಕ್ರಮ

ಮುಖ್ಯ ಅತಿಥಿಗಳು: ಶ್ರೀ ಅಶೋಕ್ ಖ್ಯಾತ ಕನ್ನಡ ಚಲನಚಿತ್ರ ನಟ

ಶ್ರೀ ವೀರಪ್ಪ ಮರಳವಾಡಿ, ಖ್ಯಾತ ಚಲನ ಚಿತ್ರ ನಿರ್ದೇಶಕ



## ಕರ್ನಾಟಕ ಲೋಚನಾ ವಿದ್ವತ್ ಪತ್ರಿಕೆಗೆ ಚಂದಾ

ಇದೇ ಜೂನ್ ತಿಂಗಳಿನಿಂದ ಪ್ರತಿಷ್ಠಾನವು ಪ್ರಕಟಿಸುತ್ತಿರುವ ಕರ್ನಾಟಕ ಲೋಚನಾ ವಿದ್ವತ್ ಪತ್ರಿಕೆಗೆ ಚಂದಾ ಹಣವನ್ನು ನಿಗದಿಸಲಾಗಿರುತ್ತದೆ. ಚಂದಾ ವಿವರ: ವಾರ್ಷಿಕ ರೂ. 100/– (ವರ್ಷದಲ್ಲಿಎರಡು ಸಂಚಿಕೆಗಳನ್ನು ಪ್ರಕಟಿಸಲಾಗುತ್ತಿದೆ)

ಆಜೀವ ಚಂದಾ ರೂ.1500/– ಆಗಿರುತ್ತದೆ.

ಎಲ್ಲಾ ಸಾಹಿತ್ಯಾಸಕ್ತರೂ ಈ ವಿದ್ವತ್ ಪತ್ರಿಕೆಗೆಚಂದಾದಾರಾಗಬೇಕೆಂದುಕೋರುತ್ತೇವೆ.

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಮೇ 2016– ಜೂನ್ 2016 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## ಸೂವೆಂ ಅರಗ ಪ್ರಶಸ್ತಿ ಪ್ರದಾನ

ಮಾಹಿತಿಯ ಅಬ್ಬರದಿಂದ ಅಪಾಯ -- ಎಸ್. ಆರ್. ವಿಜಯಶಂಕರ್ ಅಭಿಮತ

ಈ ವರ್ಷದ ಸೂವೆಂ ಅರಗ ಪ್ರಶಸ್ತಿ ಪ್ರೊ.ಕರಿಗೌಡ ಬೀಚನಹಳ್ಳಿ ಅವರಿಗೆ ಸಂದಿರುತ್ತದೆ.ಪ್ರಶಸ್ತಿಯನ್ನು ಪ್ರಸಿದ್ಧ ವಿಮರ್ಶಕ ಶ್ರಿ ಎಸ್. ಆರ್. ವಿಜಯಶಂಕರ್ ಅವರು ದಿನಾಂಕ 27ನೇ ಮೇ 2016 ಪ್ರದಾನ ಮಾಡಿರುತ್ತಾರೆ.



ಮಾಹಿತಿ ತಂತ್ರಜ್ಞಾನ ಮನುಷ್ಯನ ಎಲ್ಲ ಕ್ರಿಯೆಗಳನ್ನು ಸಂಪೂರ್ಣ ನಿಯಂತ್ರಿಸುವ ಮಟ್ಟಕ್ಕೆ ಹೋಗುತ್ತಿದ್ದು ಜ್ಞಾನದ ಮಹತ್ವ ಕಳೆದುಹೋಗುವ ಅಪಾಯವಿದೆ ಎಂದು ಹಿರಿಯ ವಿಮರ್ಶಕ, ಅಂಕಣಕಾರ ಎಸ್.ಆರ್. ವಿಜಯಶಂಕರ್ ಅಭಿಪ್ರಾಯಪಟ್ಟಿದ್ದಾರೆ.

ಬಿಎಂಶ್ರೀ ಪ್ರತಿಷ್ಠಾನ ಆಯೋಜಿಸಿದ್ದ, ಸಮಾರಂಭದಲ್ಲಿ ಡಾ.ಕರಿಗೌಡ ಬೀಚನಹಳ್ಳಿ ಅವರಿಗೆ 'ಬಸವಣ್ಣ – ಪುನರ್ಲೇಖ' ಕೃತಿಗಾಗಿ 'ಪ್ರೊ.ಸೂ. ವೆಂ. ಆರಗ ವಿಮರ್ಶಾ ಪ್ರಶಸ್ತಿ' ಪ್ರದಾನ ಮಾಡಿ ಮಾತನಾಡಿದರು.'ಮಾಹಿತಿ ಜ್ಞಾನವಲ್ಲ. ಅರಿವಿಗೂ ಮಾಹಿತಿಗೂ ವ್ಯತ್ಯಾಸವಿದೆ. ಮಾಹಿತಿಯನ್ನು ಜ್ಞಾನವಾಗಿ ಪರಿವರ್ತಿಸುವುದಕ್ಕೆ ಏನು ಮಾಡಬಹುದು ಎಂಬ ಚಿಂತನೆಯನ್ನು ಸಾಹಿತ್ಯ ಮತ್ತು ವಿಮರ್ಶೆ ಒಳಗೊಳ್ಳಬೇಕಾಗಿದೆ' ಎಂದರು.

ಕೃತಿ ಕುರಿತು ಪ್ರಸ್ತಾಪಿಸಿದ ವಿಜಯಶಂಕರ್, ಕರಿಗೌಡರ ಈ ಕೃತಿ 'ಮರು ಬರವಣಿಗೆ' ಪರಿಕಲ್ಪನೆಯನ್ನು ನಮ್ಮೆದುರು ಇಡುತ್ತಿದೆ.ಸಾಹಿತ್ಯದ ಮೂಲಕ ಚರಿತ್ರೆಯ ಮರುವ್ಯಾಖ್ಯಾನ ಮಾಡುವ ಪ್ರಯತ್ನ ಇಲ್ಲಿದೆ.ಸಂವಾದ ಸಂಸ್ಕೃತಿ ಮಾಯವಾಗಿ ಹೊಡಿ–ಬಡಿ ಸಂಸ್ಕೃತಿ ಕಾಣಿಸಿಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಮತ್ತೆ ಸಂವಾದ ಬೆಳೆಸಲು ಅನುಕೂಲವಾದ ಮನೋಸಿದ್ಧತೆಯನ್ನು 'ಬಸವಣ್ಣ – ಪುನರ್ಲೇಖ' ಕೃತಿ ಮಾಡಿಕೊಡುತ್ತದೆ ಎಂದು ಶ್ಲಾಸಿದರು.

ವಿಜಯ ಕಾಲೇಜು ಪ್ರಾಧ್ಯಾಪಕ ಡಾ. ಎಸ್. ಎಲ್. ಮಂಜುನಾಥ್ ಮಾತನಾಡಿ, ಈ ಕೃತಿ ಲಂಕೇಶರ 'ಸಂಕ್ರಾಂತಿ', ಶಿವಪ್ರಕಾಶರ 'ಮಹಾಚೈತ್ರ', ಕಾರ್ನಾಡರ 'ತಲೆದಂಡ', ಕಲಬುರ್ಗಿ– 'ಕೆಟ್ಟೀತು ಕಲ್ಯಾಣ' ಹಾಗೂ ಕಂಬಾರ– 'ಶಿವರಾತ್ರಿ' ನಾಟಕಗಳ ಮರುಬರವಣಿಗೆಯಾಗಿದೆ. ಮಿನಿ ಐತಿಹಾಸಿಕ ಕಾದಂಬರಿ ಓದಿದ ಅನುಭವ ಕೊಡುತ್ತದೆ ಎಂದರು.ಡಾ. ಕರಿಗೌಡ ಬೀಚನಹಳ್ಳಿ ಅವರು ಪ್ರಶಸ್ತಿಯನ್ನು ಸ್ವೀಕರಿಸಿ ತಮ್ಮ ಸಂತಸ ವ್ಯಕ್ತಪಡಿಸಿದರು.ಮೊದಲಿಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷ ಡಾ. ಪಿ.ವಿ. ನಾರಾಯಣ ಅವರು ಸ್ವಾಗತ ಕೋರಿದರು.ಗೌರವ ಕಾರ್ಯದರ್ಶಿ ಪ್ರೊ.ಅಬ್ದುಲ್ ಬಶೀರ್ ವಂದನಾರ್ಪಣೆ ಮಾಡಿದರು.

## ಶ್ರೀ ಎಸ್.ಆರ್. ವಿಜಯಶಂಕರ : ಕಿರುಪರಿಚಯ



ಸಾಹಿತ್ಯ ಸಂಸ್ಕೃತಿ ವಿಮರ್ಶಾ ಬರಹಗಳಿಂದ ಓದುಗರಿಗೆ ಪರಿಚಿತರಾಗಿರುವ ವಿಮರ್ಶಕ ಶ್ರೀ ಎಸ್. ಆರ್.ವಿಜಯಶಂಕರ ಕಳೆದ ನಾಲ್ಕು ದಶಕಗಳಿಂದ ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ತೊಡಗಿಕೊಂಡಿದ್ದಾರೆ. ಉದ್ಯೋಗದಲ್ಲಿ ಅವರು ಅಮೇರಿಕಾ ಮೂಲದ ಪ್ರಸಿದ್ಧ ಇಂಟೆಲ್ ಟೆಕ್ನಾಲಜಿ ಎಂಬ ಬಹುರಾಷ್ಟ್ರೀಯ ಕಂಪ್ಯೂಟರ್ ತಂತ್ರಜ್ಞಾನ ಸಂಬಂಧಿತ ಕಂಪೆನಿಯಲ್ಲಿ ಸಂವಹನ, ಸಾಮಾಜಿಕ ಜವಾಬ್ದಾರಿ ಮುಂತಾದ ವಿಭಾಗಗಳ ದಕ್ಷಿಣ ಏಷ್ಯಾದ ಮುಖ್ಯಸ್ಥರಾಗಿ ಕೆಲಸ ಮಾಡುತ್ತಿದ್ದಾರೆ.ಬೆಂಗಳೂರಿನಲ್ಲಿ ವಾಸವಿದ್ದು ಉದ್ಯೋಗ ನಿಮಿತ್ತ ದೇಶ, ವಿದೇಶಗಳಲ್ಲಿ ಸಂಚರಿಸುತ್ತಾರೆ.

ಶ್ರೀವಿಜಯಶಂಕರ ಅವರು ಪ್ರತಿ ಭಾನುವಾರ 'ವಿಜಯವಾಣಿ'ದಿನ ಪತ್ರಿಕೆಯಲ್ಲಿ 'ನುಡಿಸು' ಎಂಬ ಸಾಹಿತ್ಯ, ಸಾಂಸ್ಕೃತಿಕ ಅಂಕಣ ಬರೆಯುತ್ತಿದ್ದಾರೆ.ಆ ಮೊದಲು, ಹಲವಾರು ಪತ್ರಿಕೆಗಳಲ್ಲಿ ನಿಯಮಿತವಾಗಿ ವಿಮರ್ಶಾ ಲೇಖನಗಳನ್ನು ಅಂಕಣಗಳನ್ನು ಬರೆಯುತ್ತಿದ್ದರು.ಅದಲ್ಲದೆ ಅವರು ಅನೇಕ ಸಾಹಿತ್ಯಿಕ ಕಿರುಪತ್ರಿಕೆಗಳಲ್ಲಿ ತಮ್ಮ ವಿಮರ್ಶಾ ಲೇಖನಗಳನ್ನು ಪ್ರಕಟಿಸಿದ್ದಾರೆ.

ಮನೋಗತ,ಒಳದನಿ, ನಿಜಗುಣ ಇವರ ವಿಮರ್ಶಾ ಸಂಗ್ರಹಗಳು 'ಒಡನಾಟ' ವ್ಯಕ್ತಿ ಚಿತ್ರಗಳ ಸಂಗ್ರಹ, 'ನುಡಿಸನಿ''ನಿಧಾನ ಶ್ರುತಿ'–ಅಂಕಣ ಹಾಗೂ ಸಂಸ್ಕೃತಿ, ಸಮಾಜ ಸಂಬಂಧಿತ ಬರಹಗಳು. ವಿಮರ್ಶೆಯಲ್ಲಿ ಇತ್ತೀಚೆಗೆ ಹಿಂದಿನ ಕೃತಿಗಳ ಮರು ಓದುಗಳಿಗೆ ಗಮನ ನೀಡುತ್ತಿರುವ ವಿಜಯಶಂಕರ 'ಪ್ರತಿಮಾಲೋಕ'ಎಂಬ ಕವಿ ಅಡಿಗರ ಮರು – ಓದಿನ ಕೃತಿಯನ್ನು ಸಂಪಾದಿಸಿದ್ದಾರೆ. ಇವರ 'ಅಪ್ರಮೇಯ' ಎಂಬ ನೂತನ ವಿಮರ್ಶಾ ಸಂಕಲನ ಈಗ ಅಚ್ಚಿನಲ್ಲಿದೆ.

ಶ್ರೀವಿಜಯಶಂಕರ ಅವರಿಗೆ 2008ನೇ ಸಾಲಿನ ಪ್ರೊ॥ ವಿ.ಎಂ.ಇನಾಂದರ್ ವಿಮರ್ಶಾ ಪ್ರಶಸ್ತಿಯನ್ನು ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಸಂಸ್ಥೆ ನೀಡಿದೆ. ವಿಮರ್ಶೆಗಾಗಿ ಬೊಂಬಾಯಿ ಕರ್ನಾಟಕ ಸಂಘ ನೀಡುವ ಡಾ॥ ಸುನೀತ ಶೆಟ್ಟಿ ಪ್ರಶಸ್ತಿಯನ್ನು 2013ರಲ್ಲಿ ನೀಡಿ ಗೌರವಿಸಲಾಗಿದೆ.ಶ್ರೀವಿಜಯಶಂಕರ ಅವರ 'ನಿಜಗುಣ'ವಿಮರ್ಶಾ ಸಂಕಲನಕ್ಕೆ ಈ ಬಾರಿಯ ಕರ್ನಾಟಕ ಸಾಹಿತ್ಯ ಅಕಾಡೆಮಿಯ ವಿಮರ್ಶಾ ಪ್ರಶಸ್ತಿ ಸಂದಿದೆ.

## ಗಮಕ ವಾಹಿನಿ ಕಾರ್ಯಕ್ರಮ ಮಾಲೆ –5



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನ ಜಂಟಿಯಾಗಿ ಆಯೋಜಿಸುತ್ತಿರುವ ಗಮಕವಾಹಿನಿ ಮಾಲೆ-5ರ ಕಾರ್ಯಕ್ರಮ ದಿನಾಂಕ 1-6-2016 ರಂದು ಬಿ.ಎಂ.ಶ್ರೀ ಸಭಾಂಗಣದಲ್ಲಿ ನೆರವೇರಿತು.

ಆರು ವಿದ್ಯಾರ್ಥಿಗಳು ಪಂಪ ವಿರಚಿತ "ವಿಕ್ರಮಾರ್ಜುನ ವಿಜಯ"ದ ಆಶ್ವಾಸದಲ್ಲಿನ "ದುರ್ಯೋಧನನ ಅವಸಾನ"ವೆಂಬ ಪ್ರಸಂಗವನ್ನು ಗಮಕರೂಪದಲ್ಲಿ ನಡೆಸಿಕೊಟ್ಟರು. ನಿರೂಪಣೆಯನ್ನು ಕುಮಾರಿ ಅಮೃತಾ, ಗಮಕಿಯಾಗಿ ಕುಮಾರಿ ದ್ಯುತಿ, ಭೀಮನಾಗಿ ಕುಮಾರಿ ಸ್ನಿಗ್ಧಾ, ದುರ್ಯೋಧನನಾಗಿ ಕುಮಾರಿ,ಕೆ. ರಕ್ಷಿತಾ, ಕುಮಾರಿ ಶಾರ್ವರಿ ಧರ್ಮರಾಯ ಮತ್ತು ಅಶ್ವತ್ಥಾಮರ ದ್ವಿಪಾತ್ರಗಳಲ್ಲಿ ಹಾಗೂ ಕೃಷ್ಣ ಮತ್ತು ಲಕ್ಷ್ಮೀಪಾತ್ರಗಳಲ್ಲಿ ಕುಮಾರಿ ರುಚಿತಾ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿಕೊಟ್ಟರು.

ಗಮಕ ಕಲಾ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಎಂ.ಆರ್.ಸತ್ಯನಾರಾಯಣ ಅವರು ಕಾರ್ಯಕ್ರಮವನ್ನು ವೀಕ್ಷಿಸಿ ತಮ್ಮ ಮೆಚ್ಚುಗೆಯನ್ನು ಸೂಚಿಸಿದರು.

ಪ್ರೊ.ಅಬ್ದುಲ್ ಬಷೀರ್, ಕಾರ್ಯದರ್ಶಿಗಳು ಎಲ್ಲರಿಗೂ ಸ್ವಾಗತಕೋರಿದರು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ಸಾಕ್ಷ್ಮ ಚಿತ್ರಗಳ ಪ್ರದರ್ಶನದಲ್ಲಿ 08-06-2016ರಂದು ಡಾ. ಮಾಸ್ತಿ ವೆಂಕಟೇಶ ಐಯ್ಯಂಗಾರ್ ಅವರ ಬಗ್ಗೆಯ ಸಾಕ್ಷ್ಮ ಚಿತ್ರಗಳನ್ನು ಪ್ರದರ್ಶಿಸಲಾಯಿತು.

## ಅಕ್ಕರಗೊಟ್ಟಿ

ದಿನಾಂಕ 13ನೇ ಜೂನ್ 2016 ರಂದು ನಡೆದ ಅಕ್ಕರಗೊಟ್ಟಿ ಕಾರ್ಯಕ್ರಮದಲ್ಲಿ, ಪ್ರೊ॥ ಕೆ.ಎಸ್. ಮಧುಸೂದನ ಅವರು ಕನ್ನಡದಲ್ಲಿ ಪ್ರಥಮಾ ಪುರುಷ : ಕೆಲವು ಹೊಸ ಅಂಶಗಳು ಎಂಬ ವಿಷಯದ ಬಗ್ಗೆ ಚರ್ಚೆ ಚಾಲನೆ ಮಾಡಿದರು.

ಡಾ॥ ಎಂ.ಜಿ.ನಾಗರಾಜ್, ಡಾ॥ ವಿ. ಸಂಧ್ಯಾ, ಡಾ॥ ನಳಿನಿ ವೆಂಕಟೇಶ್, ಶ್ರೀಮತಿ ಕೆ.ಭಾರತಿ, ಡಾ। ಆರ್.ಲಕ್ಷ್ಮೀನಾರಾಯಣ, ಪ್ರೊ. ಜಿ. ಅಶ್ವತ್ಥನಾರಾಯಣ ಶ್ರೀಮತಿ ನಳಿನಾ, ಶ್ರೀ ಗುರುಪ್ರಸಾದ್, ಪ್ರೊ. ಅಬ್ದುಲ್ ಬಶೀರ್ ಮತ್ತು ಹಳಗನ್ನಡ ಕಾವ್ಯಾಭ್ಯಾಸದ ಕೆಲವು ವಿದ್ಯಾರ್ಥಿಗಳು ಭಾಗವಹಿಸಿ, ಚರ್ಚೆಯು ಅರ್ಥಪೂರ್ಣವಾಗಿ ನಡೆಯಿತು.

## ವಚನ ವಿಹಾರ

### ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ

16-06-2016 ರಂದು ಐದು ವಚನಕಾರರ ವಚನಗಳನ್ನು ಒಳಗೊಂಡಿದ್ದ ಚಿತ್ರವನ್ನು ಪ್ರದಶಿಸಲಾಯಿತು.

## 2015-16ನೇ ಸಾಲಿನಲ್ಲಿ ಪ್ರತಿಷ್ಠಾನವು ನಡೆಸಿದ ಕಾರ್ಯಕ್ರಮಗಳ ವಿವರ

| ಕಾರ್ಯಕ್ರಮಗಳು | ಸಂಖ್ಯೆ |
|---|---|
| ಪ್ರಶಸ್ತಿ ಪ್ರದಾನ ಕಾರ್ಯಕ್ರಮಗಳು | 5 |
| ದತ್ತಿನಿಧಿ ಉಪನ್ಯಾಸ ಕಾರ್ಯಕ್ರಮಗಳು | 16 |
| ಅಕ್ಕರಗೊಟ್ಟಿ ಕಾರ್ಯಕ್ರಮಗಳು | 11 |
| ಕನ್ನಡ ಸಂಸ್ಕೃತಿ ಹಾಗೂ ವಚನವಿಹಾರ ಸಾಕ್ಷ್ಯಚಿತ್ರ ಪ್ರದರ್ಶನ | 24 |
| ಇತರ ಕಾರ್ಯಕ್ರಮಗಳು | 3 |
| ಪರಸ್ಥಳದಲ್ಲಿ ನಡೆದ ಕಾರ್ಯಕ್ರಮಗಳು | 2 |
| ಸಿರಿ ಸಂಗೀತ ಕಾರ್ಯಕ್ರಮಗಳು | 2 |
| ಗಮಕವಾಹಿನಿ ಮಾಲೆ | 2 |
| ಹಳಗನ್ನಡ ತರಗತಿಉದ್ಘಟನಾ ಮತ್ತು ಸಮಾರೋಪಕಾರ್‍ಯಕ್ರಮ | 2 |
| **ಒಟ್ಟು** | **67** |

## ಪ್ರೊ॥ ಸಿ.ಕೆ. ನಾಗರಾಜರಾವ್, ಪ್ರೊ॥ ಶ್ರೀನಿವಾಸರಾವ್ ಕೊರಟಿ, ಪ್ರೊ॥ ಕ.ವೆಂ. ರಾಘವಾಚಾರ್ ದತ್ತಿ ಕಾರ್ಯಕ್ರಮ-23ಮೇ 2016




ಮೇಲ್ಕಂಡ ದತ್ತಿಕಾರ್ಯಕ್ರಮದ ಅಂಗವಾಗಿ, ಈ ವರ್ಷ ಡಾ॥ ಪ್ರಭಾಶಂಕರಪ್ರೇಮಿ, ನಿವೃತ್ತ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾಲಯ, ಇವರು "ಹಿಂದಿ ಮತ್ತು ಕನ್ನಡ ಸಾಹಿತ್ಯ"ವೆಂಬ ವಿಷಯವನ್ನು ಕುರಿತು ಉಪನ್ಯಾಸ ನೀಡಿದರು.

ಕಾರ್ಯಕ್ರಮವು, ಡಾ॥ಪಿ.ವಿ.ನಾರಾಯಣ ಅವರ ಸ್ವಾಗತ ಮತ್ತು ಉಪನ್ಯಾಸಕರ ಪರಿಚಯದೊಂದಿಗೆ ಪ್ರಾರಂಭವಾಯಿತು.

ಒಂದು ಭಾಷೆಯಲ್ಲಿನ ಧಾರ್ಮಿಕ, ಸಾಹಿತ್ಯಿಕ, ಸಾಂಸ್ಕೃತಿಕ ಅನುಭವತವನ್ನು ಮತ್ತು ಪಾರಸ್ಪರಿಕತೆಯನ್ನು ಅನ್ಯಭಾಷಿಕರಿಗೆ ಕೊಡುವ ಮತ್ತು ಕೊಳ್ಳುವಿಕೆಯು ಅನುವಾದದ ಮೂಲ ಉದ್ದೇಶ ಮತ್ತು ಇದ-ರಿಂದ ರಾಷ್ಟ್ರೀಯ ಭಾವೈಕ್ಯತೆ ಮತ್ತು ರಾಷ್ಟ್ರೀಯ ಭಾಷಾ ಸೌಹಾರ್ದತೆ ಸಾಧಿಸುವಂತಾಗುತ್ತದೆ.

ಈ ಮಹತ್ವ ಪೂರ್ಣ, ಕಾರ್ಯವು ಇತ್ತೀಚಿನದಲ್ಲ. ಇದು ಹಿಂದಿನಿಂದಲೂ ಬೆಳೆದು ಬಂದಿದೆ.ಕರ್ನಾಟಕದ ಸ್ವತಂತ್ರ ರಾಜವಂಶದ ಕದಂಬ ರಾಜರು ಉತ್ತರದ ಗುಪ್ತ ಸಾಮ್ರಾಜ್ಯದ ರಾಜನೊಂದಿಗೆ ವೈವಾಹಿಕ ಸಂಬಂಧ ಬೆಳೆಸಿ ಪ್ರಾರಂಭವಾಯಿತು ಎನ್ನಬಹುದು ಎಂದು ತಮ್ಮ ಉಪನ್ಯಾಸವನ್ನಾರಂಭಿಸಿದರು. ಕದಂಬ ವಂಶದವರಿಂದ ಆರಂಭವಾದ ದಕ್ಷಿಣದ ಮತ್ತು ಉತ್ತರದವರ ಈ ಸಂಬಂಧವನ್ನು ಸಂಕ್ಷಿಪ್ತವಾಗಿ ಪ್ರಸ್ತಾಪಿಸಿ, ತಮ್ಮ ಉಪನ್ಯಾದ ಕಿರು ಸಮಯವನ್ನು, ಹಿಂದಿ ಮತ್ತು ಕನ್ನಡ ಭಾಷೆಗಳಲ್ಲಿನ ಸಾಂಸ್ಕೃತಿಕ, ಸಾಹಿತ್ಯಿಕ ಮತ್ತು ಭಕ್ತಿ ಕ್ಷೇತ್ರದಲ್ಲಿ ಅನೇಕ ದಾಸರುಗಳು, ಸಂತರು ಮತ್ತು ಅನುಭಾವಿಗಳ ಕೊಡುಗೆಗಳನ್ನು ಸಾದೃಶವಾಗಿ ಒಂದು ತೌಲನಿಕ ಅಧ್ಯಯನವಾಗಿ ಸಭಿಕರ ಗಮನ ಸೆಳೆದರು.ಬಹಳ ಉಪಯುಕ್ತ ಉಪನ್ಯಾಸ ನೀಡಿದ ಅತಿಥಿಗಳಿಗೆ ಗೌರವ ಕಾರ್ಯದರ್ಶಿಪ್ರೊ॥ ಅಬ್ದುಲ್ ಬಷೀರ್ ವಂದನೆ ಸಲ್ಲಿಸಿದರು.

# ಶ್ರೀ ಗೋವಿಂದಜಾಲಿಹಾಳ್ ದತ್ತಿ ಭಕ್ತಿ ಗೀತೆಗಳ ಗಾಯನ ಸ್ಪರ್ಧೆ

ದಿನಾಂಕ 19ನೇ ಜೂನ್ 2016 ರಂದು ನಡೆದ 13–18 ವಯೋವ ೕಾನದಯುವಜನರಗಾಯನ ಸ್ಪರ್ಧೆಯಲ್ಲಿ ಸುಮಾರು 45 ಅಭ್ಯರ್ಥಿಗಳು ನೋಂದಾಯಿಸಿಕೊಂಡಿದ್ದು 25 ಅಭ್ಯರ್ಥಿಗಳು ಭಾಗವಹಿಸಿದ್ದರು.ಈ ಗಾಯನ ಸ್ಪರ್ಧೆಯಲ್ಲಿ ಮೊದಲ ಬಹುಮಾನಕುಮಾರಿಅದಿತಿ ಬಿ.ಪ್ರಹ್ಲಾದ್ಅವರಿಗೆ, 2ನೇ ಬಹುಮಾನಕುಮಾರಿ ಸುನಿಧಿ ಜಿ ಅವರಿಗೆ ಹಾಗೂ ಕುಮಾರಿ ವರ್ಷಿಕಾ ಬಿಎಂ ಅವರಿಗೆ ಲಭಿಸಿತು.ಈ ಗಾಯನ ಸ್ಪರ್ಧೆಯಲ್ಲಿ ವಿದುಷಿ ಶ್ರೀಮತಿ ಪದ್ಮಾಗುರುದತ್ ಹಾಗೂ ಯುವ ಪಿಟೀಲು ವಿದ್ವಾಂಸ ಸುಮುಖ ಚಂದ್ರತೀರ್ಪುಗಾರರಾಗಿದ್ದರು.ಎಲ್ಲಾ ಭಾಗೀದಾರರಿಗೂ ಭಾಗವಹಿಕೆ ಪ್ರಮಾಣಪತ್ರವನ್ನು ನೀಡಲಾಯಿತು.ಬಹುಮಾನ ವಿಜೇತರಿಗೆಸ್ಮರಣಿಕೆ ಹಾಗೂ ಪ್ರಮಾಣಪತ್ರವನ್ನುಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ನೀಡಿತು.ಜೊತೆಗೆ ಈ ದತ್ತಿ ನಿಧಿಯ ಸ್ಥಾಪಕ ಹಾಗೂ ಶ್ರೀ ಗೋವಿಂದಜಾಲಿಹಾಳ್ಅವರ ಪುತ್ರ ಶ್ರೀ ಮಿಲಿಂದ್ ಜಾಲೀಹಾಳ್ ಅವರು ಪ್ರಥಮ ಬಹುಮಾನ ಪಡೆದವರಿಗೆರೂ. 3000/– ಎರಡನೇ ಬಹುಮಾನ ಪಡೆದವರಿಗೆರೂ.2000/– ಹಾಗೂ ಮೂರನೇ ಬಹುಮಾನ ಪಡೆದವರಿಗೆರೂ. 1000/– ಪ್ರೋತ್ಸಾಹಧನದ ಬಹುಮಾನವನ್ನೂ ನೀಡಿದರು.

ಕಾರ್ಯಕ್ರಮದ ಪ್ರಾರಂಭದಲ್ಲಿಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಅಧ್ಯಕ್ಷಡಾ. ಪಿ.ವಿ. ನಾರಾಯಣಅವರು ಸ್ವಾಗತಿಸಿದರು. ಪ್ರೊ.ಅಬ್ದುಲ್ ಬಶೀರ್ ಅವರು ವಂದನಾರ್ಪಣೆ ಮಾಡಿದರು.ಡಾ. ಪಿ.ವಿ. ನಾರಾಯಣ, ಪ್ರೊ.ಅಬ್ದುಲ್ ಬಶೀರ್, ವಿದುಷಿ ಶ್ರೀಮತಿ ಪದ್ಮಾಗುರುದತ್, ಯುವ ಪಿಟೀಲು ವಿದ್ವಾಂಸ ಸುಮುಖ ಚಂದ್ರ ಹಾಗೂ ಶ್ರೀ ಮಿಲಿಂದ್ ಜಾಲೀಹಾಳ್ ಅವರುಗಳು ಪ್ರಮಾಣ ಪತ್ರಗಳು ಹಾಗೂ ಬಹುಮಾನಗಳನ್ನು ವಿತರಿಸಿದರು.



# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

**–ಡಾ.ಪಿ.ವಿ. ನಾರಾಯಣ**

ಕಣ್ಣಾಮುಚ್ಚಾಲೆ: ಇದು ಅನೇಕ ಶಬ್ದಗಳ ಕೂಡುಪದ. ಕಣ್ಣು ಮತ್ತು ಮುಚ್ಚು ಎಂಬಿವು ಸ್ಪಷ್ಟವಾಗಿವೆ. ಇದು ಮಕ್ಕಳ ಒಂದು ಆಟದ ಹೆಸರು. ಒಬ್ಬರ ಕಣ್ಣು ಮುಚ್ಚಿ ಮಿಕ್ಕವರೆಲ್ಲ ಬಚ್ಚಿಟ್ಟುಕೊಂಡ ಮೇಲೆ ಕಣ್ಣು ಬಿಡಿಸಿಕೊಂಡ ಮಗು ಬಚ್ಚಿಟ್ಟುಕೊಂಡವರನ್ನು ಹುಡುಕುವ ಆಟ. "ಕಿವಿಗೆ ಹಿತವಾಗಿ ಸಂತಸ ಹುಟ್ಟಿಸುವ ಲಯಬದ್ಧ ನಾದಪ್ರವಾಹ ಮುಖ್ಯ .. ..ಆದಿಪ್ರಾಸವೋ, ಅಂತ್ಯಪ್ರಾಸವೋ, ಅಡಿಗಡಿಗೆ ಮರುಕಳಿಸುವ ಪ್ರಾಸವೋ ಅಲ್ಲಿ ಮುಖ್ಯವೆನಿಸೀತು.ಉದ್ದೇಶ ಅರ್ಥವನ್ನು ಕೊಡಲೇಬೇಕಾಗಿಲ್ಲ ಹಾಡು" ಎಂದು ಶಿವರಾಮ ಕಾರಂತರು ಮಕ್ಕಳಹಾಡಿನ ಸ್ವರೂಪವನ್ನು ವಿವರಿಸುತ್ತಾರೆ.ಆದರೆ ಕಣ್ಣಾಮುಚ್ಚಾಲೆ ಒಂದು ಆಟವಾದರೂ ಕಣ್ಮುಚ್ಚಿದಾಗ ಹೇಳುವ "ಕಣ್ಣಾ ಮುಚ್ಚೆ ಕಾಡೇಗೂಡೇ ಉದ್ದಿನ ಮೂಟೆ ಉರುಳೇ ಹೋಯ್ತು, ನಮ್ಮ ಹಕ್ಕಿ ನಿಮ್ಮ ಹಕ್ಕಿ ಬಿಟ್ಟೇ ಬಿಟ್ಟೇ, ಬಚ್ಚಿಟ್ಟುಕೊಳ್ಳಿ" ಎಂಬ ಹಾಡಿನಂತಹ ರಚನೆ ಏನೋ ನಿಗೂಢವನ್ನೇ ಸೂಚಿಸುತ್ತಿರುವಂತಿದೆ.ಕಣ್ಮುಚ್ಚು ಎಂಬುದಕ್ಕೆ 'ಸಾವು' ಎಂಬರ್ಥವೂ ಇದ್ದು, ಕಾಡಿನ ಗೂಡು, ಉರುಳಿ ಹೋಗು, ಬಚ್ಚಿಟ್ಟುಕೊ ಮುಂತಾದವು ಸಾವಿನ ಪರಿಯನ್ನು ಹೇಳುತ್ತಿವೆಯೇನೋ ಎಂಬಂತಿದೆ. ಮೂಲದಲ್ಲಿ ಮಕ್ಕಳು ಈ ಮಾತುಗಳನ್ನು ಸೃಷ್ಟಿಸದೆ ಹಿರಿಯರು ಇವುಗಳನ್ನು ಹೇಳಿಕೊಟ್ಟಿರಬಹುದು. ಈಶ್ವರ ಕಮ್ಮಾರರ ಒಂದು ಮಕ್ಕಳ ಪದ್ಯದ ಮೊದಲ ಸಾಲುಗಳಿವು: "ಕೊಕ್ಕ ಬತ್ತಿ ಕ್ವಾಡಾ ಬತ್ತಿ ಊರಿಗೆಲ್ಲ ಒಂದೇ ಬತ್ತಿ ಓಡಲೆ ಬತ್ತಿ.. .. " ಇದೂ ಕಣ್ಣಾಣಾಮುಚ್ಚಾಲೆಯ ಪದ್ಯವನ್ನೇ ಹೋಲುವಂತಿದೆ.

ಈ ಶಬ್ದವು ಕಣ್ಮುಚ್ಚಲೆ, ಕಣ್ಣಾಮುಚ್ಚಿ, ಕಣ್ಣಾಮುಚ್ಚೆ, ಕಣ್ಣುಮುಚ್ಚಲೆ, ಕಣ್ಣುಮುಚ್ಚಳಿಕೆ, ಕಣ್ಣುಮುಚ್ಚಣಿಕೆ ಮುಂತಾಗಿ ಅನೇಕ ವಿಧಗಳಲ್ಲಿ ಬಳಕೆಯಲ್ಲಿದೆ. ಇದೊಂದು ನುಡಿಗಟ್ಟಾಗಿಯೂ ಬಳಕೆಯಲ್ಲಿದೆ. ಕಾಣಿಸಿಕೊಂಡು ಇಲ್ಲವಾಗುವ ಪರಿಯನ್ನು ಈ ನುಡಿಗಟ್ಟು ಸೂಚಿಸುತ್ತದೆ: 'ವಿದ್ಯುತ್ ಕಣ್ಣಾಮುಚ್ಚಾಲೆ' ಎಂಬುದು ದಿನಪತ್ರಿಕೆಯ ಸಾಮಾನ್ಯ ಶೀರ್ಷಿಕೆ. 'ನನ್ನ ನಿನ್ನೆಗಳೊಡನೆ ಕಣ್ಣುಮುಚ್ಚಾಲೆ' ಎಂಬುದು ಸಿದ್ಧಯ್ಯ ಪುರಾಣಿಕರ ಆತ್ಮಚರಿತ್ರೆಯ ಶಿರ್ಷಿಕೆ. ಮರೆಯಲ್ಲಿ ಅಥವಾ ತಿಳಿಯದಂತೆ ನಡೆಯುವುದು ಎಂಬರ್ಥವೂ ಈ ನುಡಿಗಟ್ಟಿಗಿದೆ: 'ಈ ದೊಡ್ಡಸ್ತನವನ್ನು ತೋರಿಸುವುದರಲ್ಲೇ ಏನೋ ಕಣ್ಣಾಮುಚ್ಚಾಲೆಯಾಟವಿದೆ'. ಎಂದರೆ ಹುನ್ನಾರ ಎಂರ್ಥವೂ ಇದಕ್ಕೆ ಪ್ರಾಪ್ತವಾಗುತ್ತದೆ.

=====

ಕತ್ತಲೆ: ಇದರ ಮೂಲ ಹಳಗನ್ನಡದಲ್ಲಿ ಬಳಕೆಯಲ್ಲಿದ್ದ 'ಕಟ್ಟಲೆ' ಎಂಬ ಶಬ್ದ. ಕತ್ತಲು ಎಂಬುದು ಮತ್ತೊಂದು ರೂಪ. ತುಳುವಿನಲ್ಲೂ 'ಕತ್ತಲೆ' ಬಳಕೆಯಲ್ಲಿದೆ. "ಕಟ್ಟಲೆ– ಮರ್ವು" ಎಂದು 'ಶಬ್ದಮಣಿದರ್ಪಣ'ವು ಅರ್ಥ [ಮರ್ವು=ಮಬ್ಬು] ನೀಡುತ್ತದೆ. "ನಿನಗೆ ಪಗಲೊಳೇಂ ಕಟ್ಟಲೆಯೆ" ಎಂಬುದು 'ಪಂಪಭಾರತ'ದ ಮಾತು.'ಕಟ್ಟಲಿಸು' ಎಂಬುದು ಕತ್ತಲೆಯಾಗು ಎಂಬರ್ಥದಲ್ಲಿ 'ಆದಿಪುರಾಣ'ದಲ್ಲಿ ಬಳಕೆಗೊಂಡಿದೆ ("ಇಮ್ಮಾವು ಕಟ್ಟಲಿಸಿರ್ದತ್ತು ಎಲೆವಳ್ಳಿ ಕಾಯ್ತು ಕರೆವಂತಿರ್ದತ್ತು."ಕತ್ತಲೆಯುಂಟುವ ೕಾಡು ಎಂಬರ್ಥದಲ್ಲಿ 'ಕರ್ಣಾಟಕ ಕಾದಂಬರಿ'ಯು 'ಕಟ್ಟಲೆವಿಡು' ಎಂಬ ಶಬ್ದವನ್ನು ಬಳಸುತ್ತದೆ ("ಕಟ್ಟಲೆವಿಡುವ ತಮಾಲಂಗಳೊಳ್").ಗೂಬೆಯನ್ನು 'ಲೀಲಾವತಿ'ಯಲ್ಲಿ 'ಕಟ್ಟಲೆವಕ್ಕಿ' ಎಂದು ಕರೆದಿದೆ ("ಇಕ್ಕಿದ ತತ್ತಿಗೆ ಕಟ್ಟಲೆವಕ್ಕಿ ಭಯಂಬಿಟ್ಟು").ಸೋಮದೇವನ 'ಉದ್ಭಟಕಾವ್ಯ'ವು ಕತ್ತಲೆಯ ಸಂತಾನವೆಂಬರ್ಥದಲ್ಲಿ 'ಕಟ್ಟಲೆವಡೆ' ಶಬ್ದಪ್ರಯೋಗಿಸುತ್ತಾನೆ ("ಮಿಸುಗುವ ಕಟ್ಟಲೆವಡೆಗಳೊಳ್ ಅಸವಸದಿಂ ಶಶಿಮರೀಚಿಗಳ್ ಪೊಣರ್ವವೊಲ್").

'ಕರ್ತಲೆ' ಎಂಬ ಅಪರೂಪದ ರೂಪವು ಒಂದು ಶಾಸನದಲ್ಲಿ ದೊರೆಯುತ್ತದೆ ("ಭಾನೂದಯದೊಳ್ ಕರ್ತಲೆಯನ್ತಿರೆ"). ಹಳಗನ್ನಡ ಬರವಣಿಗೆಯಲ್ಲಿಯೇ ಕೆಲವೆಡೆ ಕತ್ತಲೆ ಎಂಬ ರೂಪವು ಸಿಕ್ಕುತ್ತದೆ: "ಹೃದಯದೊಳೊದವಿದ ಕತ್ತಲೆ ಚೆದಱುವಿನಂ" 'ಕರ್ಣಾಟಕ ಕಾದಂಬರಿ'). ನಡುಗನ್ನಡದಲ್ಲಿ ಈ ಶಬ್ದವು 'ಕತ್ತಲೆ' ಎಂದು ವ್ಯಾಪಕವಾಗಿ ಬಳಕೆಗೆ ಬಂತು."ಕತ್ತಲೆಯೆಂಬುದು ಇತ್ತಲೆಯಯ್ಯಾ, ಗುಹೇಶ್ವರನೆಂಬುದು ಅತ್ತಲೆಯ್ಯಾ" ಎಂಬುದು ಅಲ್ಲಮಪ್ರಭುವಿನ ಪ್ರಸಿದ್ಧವಾದ ಮಾತು. "ಕತ್ತಲೆಯಲ್ಲಿ ಕನ್ನಡಿಯ ನೋಡಿ ಕಳವಳಗೊಂಡೆನಯ್ಯಾ" ಎಂಬುದು ಅಕ್ಕನ ವಚನದ ಸಾಲು. "ಮಿಂಚುಬುಳುವಿಗೆ ಸೋಲುವುದೆ ಕತ್ತಲೆಯ ಕಟಕವು" ಎಂಬುದು ಕುಮಾರವ್ಯಾಸನ ರೂಪಕ. "ಎತ್ತೆತ್ತಲುಂ ಕತ್ತಲೆಗಳಿಟ್ಟಣಿಸಿವೆ" ಎಂಬಲ್ಲಿ ಲಕ್ಷ್ಮೀಶನು ಈ ಶಬ್ದದ ಬಹುವಚನ ಬಳಸಿದ್ದಾನೆ. ಕನಕದಾಸರ 'ಮೋಹನ ತರಂಗಿಣಿ'ಯಲ್ಲಿ ಕತ್ತಲೆಯುಂಟುಮಾಡು ಎಂಬರ್ಥದಲ್ಲಿ 'ಕತ್ತಲೆಗೆಯ್' ಶಬ್ದ ಬಳಕೆಯಾಗಿದೆ ("ಕಳಿವಣ್ಣುಗಳ್ ತರುಲತೆ ಕತ್ತಲೆಗೆಯ್ದುವಾ ಬನದಿ"). "ಕತ್ತಲೆಯಲಿ ಬತ್ತಲೆಯಲಿ ತಲೆಗೆದರಿದೆ ಬದುಕು" ಎಂಬುದು ಕೆ.ಎಸ್.ನ. ಅವರ 'ಅನ್ನಪೂರ್ಣೆಗೆ' ಕವನದ ಒಂದು ಸಾಲು. ಇಲ್ಲಿ ಕತ್ತಲೆ ಎಂಬ ಪದಕ್ಕೆ ಅಜ್ಞಾನ ಎಂಬರ್ಥವೂ ಹೊಂದುತ್ತದೆ. ದಟ್ಟ ಕತ್ತಲೆ ಎಂಬರ್ಥ 'ಕಗ್ಗತ್ತಲೆ' ಶಬ್ದ ಕುಮಾರವ್ಯಾಸ ಭಾರತ'ದಲ್ಲಿಯೇ ಬಂದಿದೆ ("ಕಗ್ಗತ್ತಲೆಯ ಬಲುಗಂಡಿಯಲಿ ಸಿಲುಕಿತು ಕಂಗಳಂಗವಣೆ").

ಕತ್ತಲು ಎಂಬ ರೂಪವೂ ಈಗ ವ್ಯಾಪಕವಾಗಿ ಬಳಕೆಯಲ್ಲಿದೆ. "ಹಬ್ಬಿತು ಕತ್ತಲು ಎದೆಎದೆಯೊಳಗೆ" ಎಂಬ ಸಾಲು ಪು.ತಿ.ನ. ಅವರ 'ವಿಕಟಕವಿ ವಿಜಯ' ನಾಟಕದ್ದು. 'ಕಗ್ಗತ್ತಲು' ರೂಪವೂ ಇದೆ."ಕದ್ದಿಂಗಳು ಕಗ್ಗತ್ತಲು" ಕುವೆಂಪು ಪ್ರಯೋಗ.

# ಅಭಿನಂದನೆಗಳು

## ಡಾ.ಮಲ್ಲಿಕಾಘಂಟೆ ಅವರಿಗೆ 'ಡಾ. ಬಿ. ಸರೋಜಾದೇವಿ ಸಾಹಿತ್ಯ' ಪ್ರಶಸ್ತಿ

ಸುಪ್ರಸಿದ್ಧ ಕನ್ನಡ ಪ್ರಾಧ್ಯಾಪಕರೂ ಹಿರಿಯ ವಿದ್ವಾಂಸರೂ ವೈಚಾರಿಕ ಹೋರಾಟಗಾರರೂ ಖ್ಯಾತ ಕವಿಗಳೂ ನಾಟಕಕಾರರೂ ವಿಮರ್ಶಕರೂ ಗ್ರಂಥ ಸಂಪಾದಕರೂ ಹಿರಿಯ ಸಂಸ್ಕೃತಿ ಚಿಂತಕರೂ ಸರ್ವಧರ್ಮ ಸಮನ್ವಯಿಗಳೂ ದಕ್ಷ ಆಡಳಿತಗಾರರೂ ಹದಿನೈದಕ್ಕೂ ಹೆಚ್ಚು ಪ್ರಶಸ್ತಿಗಳನ್ನು ಪಡೆದವರೂ ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಮಹಿಳಾ ಕುಲಪತಿಗಳೂ ಆದ ಸನ್ಮಾನ್ಯ ಡಾ. ಮಲ್ಲಿಕಾ ಎಸ್. ಘಂಟಿಯವರು ಕನ್ನಡ ಸಾಹಿತ್ಯ ಪರಿಷತ್ತು ನೀಡುವ 'ಡಾ.ಬಿ. ಸರೋಜಾದೇವಿ ಸಾಹಿತ್ಯ' ಪ್ರಶಸ್ತಿಗೆ ಭಾಜನರಾಗಿದ್ದಾರೆ. ಡಾ.ಮಲ್ಲಿಕಾಘಂಟೆ ಯವರಿಗೆ 'ಹೊಂಗನಸು' ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಮಕ್ಕಳ ಸಾಹಿತ್ಯಕ್ಕೆ ನೀಡಿದ ಕೊಡುಗೆಗಾಗಿ ಡಾ.ಸುಮತೀಂದ್ರ ನಾಡಿಗ್ ಅವರಿಗೆ 2016ನೇ ಸಾಲಿನ 'ಬಾಲಸಾಹಿತ್ಯ ಪುರಸ್ಕಾರ', ಸಣ್ಣ ಕಥೆಗಳ ಸಂಗ್ರಹ 'ಜೀರೊ ಮತ್ತು ಒಂದು' ಕೃತಿಗೆ ವಿಕ್ರಮ್ ಹತ್ವಾರ್ 'ಯುವ ಪುರಸ್ಕಾರ'ಕ್ಕೆ ಆಯ್ಕೆಯಾಗಿದ್ದಾರೆ.

## ಡಾ. ಸುಮತೀಂದ್ರ ನಾಡಿಗ್ ಅವರಿಗೆ ಬಾಲಸಾಹಿತ್ಯ ಪುರಸ್ಕಾರ:

2010ರಿಂದ 14ರವರೆಗೆ ಪ್ರಕಟವಾಗಿರುವ ಮಕ್ಕಳ ಸಾಹಿತ್ಯ ಕೃತಿಗಳಿಗೆ ಬಾಲಸಾಹಿತ್ಯ ಪುರಸ್ಕಾರ ನೀಡಲಾಗಿದೆ. ಭಾರತದ 21 ಭಾಷೆಗಳಲ್ಲಿ ಪ್ರಶಸ್ತಿ ಘೋಷಿಸಲಾಗಿದ್ದು ಕನ್ನಡ, ತಮಿಳು, ಅಸ್ಸಾಮಿ, ಒಡಿಯಾ, ಪಂಜಾಬಿ, ಮರಾಠಿ ಹಾಗೂ ಸಿಂಧಿ ಭಾಷೆಗಳಲ್ಲಿ ಒಟ್ಟಾರೆ ಕೊಡುಗೆ ಪರಿಗಣಿಸಿ ಸಾಹಿತಿಗಳಿಗೆ ಪ್ರಶಸ್ತಿ ಘೋಷಿಸಲಾಗಿದೆ.



ಪ್ರಶಸ್ತಿಯು ತಲಾ 50 ಸಾವಿರ ರೂ.ನಗದು, ತಾಮ್ರಫಲಕ ಒಳಗೊಂಡಿದೆ. ನ.14ರಂದು ನಡೆಯುವ ಕಾರ್ಯಕ್ರಮದಲ್ಲಿ ಪ್ರದಾನ ಮಾಡಲಾಗುವುದು. ಡಾ. ಸುಮತೀಂದ್ರ ನಾಡಿಗ್ ಅವರಿಗೆ 'ಹೊಂಗನಸು' ಅಭಿನಂದನೆಗಳನ್ನು ಸಲ್ಲಿಸುತ್ತದೆ.

## ಲೇಖಕ ವಿಕ್ರಮ್ ಹತ್ವಾರ್ ಅವರಿಗೆ 'ಯುವ ಪುರಸ್ಕಾರ'

ಯುವ ಪುರಸ್ಕಾರ: ಕನ್ನಡದ ಯುವ ಕಥೆಗಾರ ವಿಕ್ರಮ್ ಹತ್ವಾರ್ ಸೇರಿ 24 ಭಾಷೆಗಳ ಯುವ ಸಾಹಿತಿಗಳಿಗೆ ಪ್ರಶಸ್ತಿ ಘೋಷಿಸಲಾಗಿದೆ. 35 ವರ್ಷದೊಳಗಿನ ಸಾಹಿತಿಗಳಿಗೆ ನೀಡುವ ಪ್ರಶಸ್ತಿಯನ್ನು ಹತ್ವಾರ್ ಅವರ 'ಜೀರೊ ಮತ್ತು ಒಂದು' ಕೃತಿಯನ್ನು ಆಯ್ಕೆ ಮಾಡಲಾಗಿದೆ.ಶ್ರೀ ವಿಕ್ರಮ್ ಹತ್ವಾರ್ ಅವರಿಗೆ 'ಹೊಂಗನಸು' ಅಭಿನಂದನೆಗಳನ್ನು ಸಲ್ಲಿಸುತ್ತದೆ



## ಲೇಖಕ ರಘು ಕಾರ್ನಾಡ್ ಅವರಿಗೆ 'ಯುವ ಪುರಸ್ಕಾರ'



ಬೆಂಗಳೂರು: ಕನ್ನಡಿಗ ಲೇಖಕ ಹಾಗೂ ಪತ್ರಕರ್ತ ರಘು ಕಾರ್ನಾಡ್ ಅವರ ಇಂಗ್ಲಿಷ್ ಕೃತಿಗೆ 2016ನೇ ಸಾಲಿನ ಕೇಂದ್ರ ಸಾಹಿತ್ಯ ಅಕಾಡೆಮಿ 'ಯುವ ಪುರಸ್ಕಾರ' ಲಭಿಸಿದೆ.ಮಣಿಪುರದ ಇಂಫಾಲದಲ್ಲಿ ನಡೆದ ಅಕಾಡೆಮಿ ಸಭೆಯಲ್ಲಿ ಈ ಘೋಷಣೆ ಮಾಡಲಾಗಿದೆ.ಎರಡನೇ ಮಹಾಯುದ್ಧದಲ್ಲಿ ಭಾಗವಹಿಸಿದ ಭಾರತೀಯ ಸೈನಿಕರ ಕುರಿತ ಜೀವನ ಚರಿತ್ರೆ 'ಫಾರ್ದೆಸ್ಟ್ ಫೀಲ್ಡ್– ಎ ಸ್ಟೋರಿ ಆಫ್ ಇಂಡಿಯಾಸ್ ಸೆಕೆಂಡ್ ವರ್ಲ್ಡ್ ವಾರ್' ಕೃತಿಗೆ ಇಂಗ್ಲಿಷ್ ಭಾಷಾ ವಿಭಾಗದಲ್ಲಿ ಯುವ ಪುರಸ್ಕಾರ ಲಭಿಸಿದೆ.ಪ್ರಶಸ್ತಿಯು 5 ಸಾವಿರ ರೂ.ನಗದು ಹಾಗೂ ತಾಮ್ರ ಫಲಕ ಒಳಗೊಂಡಿದೆ. ಶ್ರೀ ರಘು ಕಾರ್ನಾಡ್ ಅವರಿಗೆ 'ಹೊಂಗನಸು' ಅಭಿನಂದನೆಗಳನ್ನು ಸಲ್ಲಿಸುತ್ತದೆ

# ಪ್ರತಿಷ್ಠಾನದಲ್ಲಿ 'ಹಿರಿಯ ವಿದ್ಯಾರ್ಥಿ ವೇದಿಕೆ'ಯ ರಚನೆ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಎಂ.ಫಿಲ್ ಮತ್ತು ಪಿಎಚ್.ಡಿ ಪದವಿಗಳನ್ನು ಪಡೆದ ಒಂದು ನೂರಕ್ಕೂ ಹೆಚ್ಚಿನ ಹಿರಿಯ ವಿದ್ಯಾರ್ಥಿಗಳಿದ್ದು, ಅವರ ಸಭೆಯೊಂದನ್ನು ತಾ। 18–06–2016 ರಂದು ಸಂಜೆ ಎಂ.ವಿ.ಸೀ ಸಭಾಂಗಣದಲ್ಲಿ ಆಯೋಜಿಸಲಾಗಿತ್ತು.ಸಭೆಗೆ ಹಾಜರಾಗಿದ್ದ ಹಿರಿಯ ವಿದ್ಯಾರ್ಥಿಗಳನ್ನು ಪ್ರತಿಷ್ಠಾನದ ಅಧ್ಯಕ್ಷ ಡಾ। ಪಿ. ವಿ.ನಾರಾಯಣ ಬರಮಾಡಿಕೊಂಡು, ಪ್ರತಿಷ್ಠಾನದ ವಿವಿಧ ಚಟುವಟಿಕೆಗಳ ಸ್ಥೂಲ ಪರಿಚಯ ಮಾಡಿಕೊಟ್ಟು, ಯುವ ಪೀಳಿಗೆಗೆ ಸೇರಿದ ಹಿರಿಯ ವಿದ್ಯಾರ್ಥಿಗಳು ವೇದಿಕೆಯೊಂದನ್ನು ರಚಿಸಿಕೊಂಡು ಚರ್ಚೆ, ಉಪನ್ಯಾಸ, ಗೋಷ್ಠಿ ಮುಂತಾದ ಚಟುವಟಿಕೆಗಳನ್ನು ನಡೆಸುವುದಾದರೆ ಪ್ರತಿಷ್ಠಾನವು ಎಲ್ಲ ವಿಧದ ನೆರವನ್ನು ನೀಡಲು ಸಿದ್ಧವಿರುವುದಾಗಿ ತಿಳಿಸಿದರು.

ಸಭೆಯಲ್ಲಿ ಸೇರಿದ್ದ ವಿದ್ಯಾರ್ಥಿಗಳೆಲ್ಲ ಈ ಸಲಹೆಗೆ ಉತ್ಸಾಹದಿಂದ ಸ್ಪಂದಿಸಿ ತಕ್ಷಣದಿಂದಲೇ 'ಹಿರಿಯ ವಿದ್ಯಾರ್ಥಿ ವೇದಿಕೆ'ಯೊಂದನ್ನು ರಚಿಸಿಕೊಳ್ಳಲು ಮುಂದಾದರು.ಯಲಹಂಕ ಉಪನಗರದ ಜ್ಞಾನಜ್ಯೋತಿ ಸಂಜೆ ಪದವಿ ಕಾಲೇಜು ಪ್ರಾಂಶುಪಾಲ ಶ್ರೀ ರಮೇಶ್ ವೇದಿಕೆಯ ಸಂಚಾಲಕರಾಗಲು ಮುಂದಾಗಲು, ಅವರಿಗೆ ಎಲ್ಲರ ಬೆಂಬಲ ದೊರೆಯಿತು; ಅಲ್ಲದೆ ಅವರ ಜೊತೆಯಲ್ಲಿ ಕಾರ್ಯನಿರ್ವಹಿಸಲು ಶ್ರೀಮತಿ ಮಹೇಶ್ವರಿ, ಶ್ರೀಮತಿ ಅರ್ಚನ ಹಾಗೂ ಶ್ರೀ ನಾಗೇಶ್ ತಮ್ಮ ಒಪ್ಪಿಗೆ ನೀಡಿದರು.ವೇದಿಕೆಯ ಕಾರ್ಯಚಟುವಟಿಕೆಗಳ ಸ್ವರೂಪವನ್ನು ನಿರ್ಧರಿಸಿ ಅವನ್ನು ಆರಂಭಿಸಲು ಇಷ್ಟರಲ್ಲಿಯೇ ಮತ್ತೊಮ್ಮೆ ಸೇರಲು ಅವರು ನಿರ್ಣಯಿಸಿದರು.

ಸಭೆಗೆ ಬಂದಿದ್ದ ಡಾ। ಶಾಂಭವಿ ಹಲವು ಸಲಹೆಗಳನ್ನಿತ್ತರು.ಸಭೆಯಲ್ಲಿ ಹಸ್ತಪ್ರತಿ ವಿಭಾಗದ ಶ್ರೀ ಗುರು ಪ್ರಸಾದ್ ಹಾಜರಿದ್ದು, ಸಭೆಯ ನಡಾವಳಿಗಳನ್ನು ಟಿಪ್ಪಣಿ ಮಾಡಿಕೊಂಡರು. ಪ್ರೊ। ಎಂ.ಎಸ್. ರಾಮಪ್ರಸಾದ್ ಮಾತನಾಡಿ ಕೆಲವು ಸಲಹೆಗಳನ್ನಿತ್ತು ಕೊನೆಯಲ್ಲಿ ಬಂದವರಿಗೆಲ್ಲ ವಂದನೆ ಅರ್ಪಿಸಿದ ನಂತರ ಸಭೆ ಮುಕ್ತಾಯಗೊಂಡಿತು

# ಶ್ರದ್ಧಾಂಜಲಿ



ಹಿರಿಯ ಸಾಹಿತಿ ನಾಡೋಜ ಡಾ ದೇ.ಜವರೇಗೌಡ ಅವರು, ದಿನಾಂಕ 30-5-2016ರಂದು ಮೈಸೂರಿನಲ್ಲಿ ನಿಧನರಾದರು. ಅವರ ಅಂತ್ಯಕ್ರಿಯೆಯನ್ನು ಯಾವುದೇ ಧಾರ್ಮಿಕ ವಿಧಿವಿಧಾನಗಳಿಲ್ಲದೆ ಮೈಸೂರಿನಲ್ಲಿ ನಡೆಸಲಾಯಿತು.

ದೇಜಗೌ ಎಂದೇ ಹೆಸರಾಗಿರುವ ದೇ. ಜವರೇಗೌಡ ಅವರು ಕನ್ನಡದ ಆಧುನಿಕ ಸಂಸ್ಕೃತಿಯನ್ನು ಕಟ್ಟಿದವರಲ್ಲಿ ಒಬ್ಬರು. ಸರಿಸುಮಾರು ಏಳು ದಶಕಗಳಿಂದ ವಿದ್ವತ್ತು, ಆಡಳಿತ ಮತ್ತು ಚಳುವಳಿಗಳೆಂಬ -ಮೂರು ನೆಲೆಗಳಲ್ಲಿ ಮಾಡಿರುವ ಕೆಲಸಗಳು ಅವರ ಕೊಡುಗೆಯ ಸ್ವರೂಪವನ್ನು ನಿರ್ಧರಿಸಿವೆ. ಕನ್ನಡ ಭಾಷೆಗೆ ಶಾಸ್ತ್ರಿಯ ಸ್ಥಾನಮಾನವನ್ನು ದೊರಕಿಸಿಕೊಡುವ ಪ್ರಯತ್ನದಲ್ಲಿ ಇವರ ಪಾತ್ರ ಹಿರಿದು. ಕನ್ನಡ ಆಡಳಿತ ಭಾಷೆಯಾಗಬೇಕು, ಕನ್ನಡ ಮಾಧ್ಯಮವಾಗಬೇಕು, ಕನ್ನಡ ಸಂಸ್ಕೃತಿ ಇತಿಹಾಸ, ಕಾವ್ಯ ಪರಂಪರೆಯಿಂದ ಕನ್ನಡಿಗರು ಚೈತನ್ಯ ತುಂಬಿಕೊಂಡು ರಾಷ್ಟ್ರದಲ್ಲಿ ತಲೆಯೆತ್ತಿ ಮೆರೆಯಬೇಕು, ಕನ್ನಡಕ್ಕೆ ವಿಶ್ವಮಾನ್ಯತೆ ದೊರೆಯಬೇಕು ಎಂಬ ಹಂಬಲವನ್ನು ತುಂಬಿಕೊಂಡು ಅವಿರತವಾಗಿ ಶ್ರಮಿಸಿದ ಕೀರ್ತಿ ಇವರದು. ಕನ್ನಡಕ್ಕೆ ಎಲ್ಲೇ ಸಮಸ್ಯೆಗಳು ಉದ್ಭವಿಸಿದರೂ ಇಳಿವಯಸ್ಸಿನಲ್ಲೂ ಹಾಜರಾಗುತ್ತಿದ್ದರು.ಕುವೆಂಪು ವಿದ್ಯಾವರ್ಧಕ ಟ್ರಸ್ಟ್ ಇವರ ಕನಸಿನ ಕುಡಿ.ದೇ.ಜವರೇಗೌಡ ಅವರು, ವಿವಿಧ ಪ್ರಕಾರಗಳಲ್ಲಿ 400ಕ್ಕೂ ಹೆಚ್ಚು ಪುಸ್ತಕಗಳನ್ನು ಬರೆದಿದ್ದಾರೆ.ಇವರು ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದರು.

ಬಿ.ಎಂ.ಶ್ರೀ ಅವರ ಬಗ್ಗೆ ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಬಗ್ಗೆ ವಿಶೇಷ ಅಭಿಮಾನ ಹೊಂದಿದ್ದ ದೇ.ಜವರೇಗೌಡ ಅವರ ಸೂಚನೆಯಂತೆ ದಿನಾಂಕ 23-03-2016 ರಂದು ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ಶ್ರೀ ಕುವೆಂಪು ವಿದ್ಯಾ ಪರಿಷತ್ತು, ಮೈಸೂರು ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಹಯೋಗದಲ್ಲಿ ""ಬಿ.ಎಂ.ಶ್ರೀ ನೆನಪು"" ಕಾರ್ಯಕ್ರಮವನ್ನು ಮೈಸೂರು ಜಯಲಕ್ಷ್ಮಿಪುರಂ ನಲ್ಲಿ ಇರುವ ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್ ನ ಶ್ರೀ ವಿವೇಕಾನಂದ ಪದವಿ ಪೂರ್ವ ಕಾಲೇಜು ಸಭಾಂಗಣದಲ್ಲಿ ನಡೆಸಲಾಯಿತು.

ತಮ್ಮ ಅನಾರೋಗ್ಯದ ನಡುವೆಯೂ ಹಿರಿಯ ಸಾಹಿತಿ ನಾಡೋಜ ಡಾ. ದೇ. ಜವರೇ ಗೌಡ ಅವರುಈ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಡಾ. ಪಿ.ವಿ. ನಾರಾಯಣ,ಶ್ರೀ ರಾಮಪ್ರಸಾದ್,ರವೀಂದ್ರನಾಥ್, ಪ್ರೊ.ಅಬ್ದುಲ್ ಬಶೀರ್, ಪ್ರೊ.ಅನಿಲ್ ಕುಮಾರ್,ಪ್ರೊ. ಹೆಚ್. ಶೇಷಗಿರಿರಾವ್, ಶ್ರೀ ಗುರುಪ್ರಸಾದ್, ಹಾಗೂ ಪ್ರೊ. ಶಾಂತರಾಜು ಅವರುಗಳಿಗೆ ನಾಡೋಜ ಡಾ. ದೇ. ಜವರೇ ಗೌಡ ಅವರನ್ನು ಭೇಟಿ ಮಾಡುವ ಅವಕಾಶ ದೊರಕಿತ್ತು.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಆಡಳಿತ ವರ್ಗ ಮತ್ತು ಸದಸ್ಯರೆಲ್ಲರೂ ಪ್ರೊ. ದೇ. ಜವರೇಗೌಡ ಅವರಿಗೆ ಈ ಮೂಲಕ ಭಾವ ಪೂರ್ವಕ ಶ್ರದ್ಧಾಂಜಲಿಯನ್ನು ಸಲ್ಲಿಸುತ್ತದೆ.

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2015-2017
Office of Posting: Bangalore PSO, Bangalore 560026
Price :Annual Subscription Rs. 20/-
Date of Posting :30-06-2016

## 2016 ಜೂನ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷಣಾ ಕಾರ್ಯವು ನಡೆಯುತ್ತಿದೆ. 2016ರ ಜೂನ್‌ತಿಂಗಳಿನಲ್ಲಿ 13 ಗ್ರಂಥಗಳ ಶುಷ್ಕ ಶುದ್ಧೀಕರಣ, 16 ಗ್ರಂಥಗಳಿಗೆ ತೈಲ/ಮಸಿ ಲೇಪನ ಕಾರ್ಯ, 22 ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಕಾರ್ಯ, 2 ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ, 2 ಗ್ರಂಥಗಳಿಗೆ ಬಟ್ಟೆ ಸುತ್ತುವ ಕಾರ್ಯ , 22 ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿದೆ. 600 ಪುಟಗಳ ಕಾಗದ ಹಸ್ತಪ್ರತಿಗಳ/ ಪುಸ್ತಕಗಳ ಸ್ವಚ್ಛತಾಕಾರ್ಯ ಮತ್ತು ಡಿಜಿಟಲೈಜೇಷನ್ ಕಾರ್ಯವನ್ನು ಮುಗಿಸಿದೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ-ಅಂಚೆ

ಶ್ರೀಮತಿ/ಶ್ರೀ..........................................................................................

..........................................................................................

..........................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು - ೧೯
ದೂರವಾಣಿ : ೨೬೬೧೫೮೭೭